# ಶಾಲಾಶಿಕ್ಷಣದ ಆಡಳಿತ, ಉಸ್ತುವಾರಿ ಹಾಗು ನಿರ್ವಹಣೆ: ಉದ್ದೇಶಿತ ರಾಷ್ಟ್ರೀಯ ಶಿಕ್ಷಣನೀತಿ

ಸುಜಾತಾ ರಾವ್

೧೯೯೨ರಲ್ಲಿ ತರಲಾದ ಮಾರ್ಪಾಡುಗಳ ಜೊತೆಗೆ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ದೇಶದಲ್ಲಿ ಶಿಕ್ಷಣದ ಅಭಿವೃದ್ಧಿಗೆ ಮಾರ್ಗದರ್ಶಿಯಾಗಬಲ್ಲ ವ್ಯಾಪಕವೂ, ಸಮಗ್ರವೂ ಆದ ಚೌಕಟ್ಟಿನ ನಿರೂಪಣಾ ಪ್ರಯಾಸದ ಮುಖ್ಯ ಉಪಕ್ರಮ ಎನ್ನಬಹುದು. ಗುಣಮಟ್ಟವುಳ್ಳದ್ದೂ, ನಿಷ್ಪಕ್ಷಪಾತವಾದದ್ದೂ, ಸಾರ್ವತ್ರಿಕ ರೂಪದ್ದೂ ಆದ ಶಿಕ್ಷಣದ ಅಗತ್ಯದ ಬಗ್ಗೆ ಬೆಳಕು ಚೆಲ್ಲಲು ಯತ್ನಿಸಿದ್ದರಿಂದ ಈ ಕಡತಗಳನ್ನು ಮೈಲುಗಲ್ಲುಗಳು ಎನ್ನಬಹುದು. ಶಿಕ್ಷಣಕ್ಷೇತ್ರಕ್ಕೆ ಹೇಗೆ ಸಂಪನ್ಮೂಲಗಳನ್ನು ಒದಗಿಸಬಹುದು, ಶಿಕ್ಷಕರ ಸ್ಥಿತಿಗತಿಗಳನ್ನು ಹಾಗು ಶಿಕ್ಷಕವೃತ್ತಿಯನ್ನು ಸುಧಾರಿಸಲು ಯಾವ ರೀತಿಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಬಹುದು ಮತ್ತು ಶಿಕ್ಷಣ ಕ್ಷೇತ್ರದಂತಹ ಅಗಾಧ ಸಾರ್ವಜನಿಕ ವ್ಯವಸ್ಥೆಯನ್ನು ಉತ್ತಮ ನಿರ್ವಹಣೆ, ಆಡಳಿತಗಳಿಗೆ ಒಳಪಡಿಸಬಹುದು ಎಂಬುದರ ಬಗ್ಗೆ ಉದಾರರೂಪದ ಸಲಹೆಗಳನ್ನು ಈ ಕಡತವು ನೀಡಿತು. ಸಮುದಾಯಗಳ ಅಗತ್ಯಗಳಿಗೆ ಸ್ಪಂದಿಸುವಂತಹ ಹಾಗು ಗುಣಮಟ್ಟದ ಶಿಕ್ಷಣವನ್ನು ಸಾರ್ವಜನಿಕ ಶಾಲೆಗಳಲ್ಲಿ ನೀಡುವ ಬಗ್ಗೆ ದೇಶದ ಪ್ರಜೆಗಳ ಎದುರು ಹೊಣೆಗಾರಿಕೆಯನ್ನು ಒಪ್ಪಿಕೊಳ್ಳುವಂತಹ ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯ ಮಹತ್ತ್ವವೇ ೧೯೮೬ರ (ಹಾಗು ೯೨ರ) ಶಿಕ್ಷಣನೀತಿಯ ಮುಖ್ಯ ಸಿದ್ಧಾಂತವಾಗಿತ್ತು.

ಅಂತಿಮ ರಾಷ್ಟ್ರೀಯ ಶಿಕ್ಷಣನೀತಿಯನ್ನು ಬಿಡುಗಡೆಗೊಳಿಸಿದ ಸುಮಾರು ಇಪ್ಪತ್ತೈದು ವರ್ಷಗಳ ಬಳಿಕ ಹೊಸ ಶಿಕ್ಷಣನೀತಿಯೊಂದನ್ನು ಮಂಡಿಸಿದ್ದು, ಈ ನೀತಿಯಲ್ಲಿ "ಅಧಿಕಾರ" ಹಾಗು "ನಿರ್ವಹಣೆ"ಗಳಂತಹ ವಿಚಾರಗಳನ್ನು ಯಾವ ರೀತಿ ಕಾಣಲಾಗಿದೆ ಎಂಬುದರ ಪರಿಶೀಲನೆ ಪ್ರಯೋಜನಕರವಾಗಿದೆ. ೨೦೧೬ರ ಉದ್ದೇಶಿತ ನೀತಿಯ ವಿಚಾರವಾಗಿ ನಡೆದ ಸಾರ್ವಜನಿಕ ಸಂವಾದದ ಭಾಗಗಳಾದ ಎರಡು ಮುಖ್ಯ ಕಡತಗಳು ಸಾರ್ವಜನಿಕ ಪರಿಶೀಲನೆಗೆ ಲಭ್ಯವಿವೆ. ಅವುಗಳಲ್ಲಿ ಮೊದಲನೆಯದು ಟಿ.ಎಸ್.ಆರ್. ಸುಬ್ರಹ್ಮಣ್ಯಮ್ ನೇತೃತ್ವದ ೨೦೧೬ರ ಹೊಸ ಶಿಕ್ಷಣನೀತಿಯ ಅಭಿವೃದ್ಧಿಗಾಗಿ ರಚಿತವಾಗಿದ್ದ ಮಂಡಳಿಯ ವರದಿ (Report of the committee for Evolution of the New Education policy 2016). ಎರಡನೆಯದು, "೨೦೧೬ರ ರಾಷ್ಟ್ರೀಯ ಶಿಕ್ಷಣನೀತಿಯ ಕರಡಿಗಾಗಿ ಕೆಲ ಒಳಸುರಿಗಳು" (Some inputs for Draft National Education Policy 2016) ಎಂಬ ಶೀರ್ಷಿಕೆ ಹೊತ್ತ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ವರದಿ. ದೇಶದ ಶಿಕ್ಷಣ ಕ್ಷೇತ್ರದ, ಅದರಲ್ಲೂ ವಿಶೇಷವಾಗಿ ಶಾಲಾಶಿಕ್ಷಣ ವಲಯದ, ನಿರ್ವಹಣೆ, ಆಡಳಿತ ಹಾಗು ಅಧಿಕಾರಗಳ ವಿಚಾರವಾಗಿ ಮಾಡಲಾದ ಶಿಫಾರಸುಗಳನ್ನು ಯಾವ ಧೋರಣೆಗಳು, ಚಿಂತನೆಗಳು ರೂಪಿಸಿವೆ ಎಂಬುದರ ಬಗ್ಗೆ ಈ ಎರಡು ಕಡತಗಳೂ ಒಳನೋಟಗಳನ್ನು ನೀಡುತ್ತವೆ.

೨೦೧೬ರ ಹೊಸ ಶಿಕ್ಷಣನೀತಿಯ ಅಭಿವೃದ್ಧಿಗಾಗಿ ರಚಿತವಾದ ಸಮಿತಿಯು ಸಲ್ಲಿಸಿದ ವರದಿಯಲ್ಲಿ ಎರಡು ಮುಖ್ಯ ಸಂಗತಿಗಳು ದಾಖಲಾಗಿವೆ. ಮೊದಲನೆಯದು, ದೇಶದಲ್ಲಿ ಇಂದು ಶಿಕ್ಷಣ ವ್ಯವಸ್ಥೆ ಹಳಿತಪ್ಪಿದೆ; ಆದ್ದರಿಂದ, ನೀತಿಯು ತನ್ನ ಗಮನವನ್ನು ಪ್ರಾಥಮಿಕವಾಗಿ ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವತ್ತ ಹರಿಸಿ, ಶಿಕ್ಷಣವ್ಯವಸ್ಥೆಯಲ್ಲಿ ಜನರ ವಿಶ್ವಾಸವನ್ನು ಪುನರ್‌ಸ್ಥಾಪಿಸಬೇಕು ಎಂಬುದಾಗಿದೆ. ಎರಡನೆಯದು, ಪ್ರಸ್ತುತ ಶಿಕ್ಷಣ ವ್ಯವಸ್ಥೆಯಲ್ಲಿನ ಬಹುತೇಕ ಅಕ್ಷಮತೆಗಳು ವ್ಯವಸ್ಥೆಯ ಆಡಳಿತದ ಎಲ್ಲಾ ಹಂತಗಳನ್ನೂ (ಶಾಲಾ ಶಿಕ್ಷಣದಿಂದ ಹಿಡಿದು ಉನ್ನತ ಶಿಕ್ಷಣದವರೆಗೂ) ವ್ಯಾಪಿಸಿರುವ ರಾಜಕೀಯ ಹಸ್ತಕ್ಷೇಪದಿಂದ ಉಂಟಾಗಿದೆ ಎಂಬುದಾಗಿದೆ. "ಶಿಕ್ಷಕರ ಪ್ರೇರಣೆ ಹಾಗು ತರಬೇತಿಯ ವಿಚಾರಗಳಲ್ಲಿ ಗಂಭೀರ ಅಂತರಗಳು, ಶಿಕ್ಷಣವಲಯದಲ್ಲಿ ಕಾರ್ಯಪಡೆಯ ನಿರ್ವಹಣೆಯು ಬಯಸಿದ ಮಟ್ಟಕ್ಕಿಂತ ಕೆಳ ಮಟ್ಟದಲ್ಲಿರುವುದು, ಎಲ್ಲಾ ಹಂತಗಳಲ್ಲಿಯೂ ಕಾರ್ಯಕ್ಷಮತೆಯ ಮೇಲ್ವಿಚಾರಣೆ ಹಾಗು ಉಸ್ತುವಾರಿಗಳಿಗೆ ಅಗತ್ಯವಿರುವ ಗಮನ ನೀಡದಿರುವುದು– ಚುಟುಕಾಗಿ ಹೇಳುವುದಾದರೆ, ಈ ಕ್ಷೇತ್ರದಲ್ಲಿ ನಿರ್ವಹಣೆಗೆ ಸಂಬಂಧಪಟ್ಟ ಎಲ್ಲಾ ವಿಷಯಗಳಲ್ಲೂ ಇರುವ ದಿವ್ಯನಿರ್ಲಕ್ಷ್ಯವು ಸದ್ಯದ ಪರಿಸ್ಥಿತಿಗೆ ಕಾರಣವಾಗಿದೆ" ಎಂದು ಈ ಸಮಿತಿಯ

ವರದಿಯು ಗುರುತಿಸಿತು (ಪು. ೩೪). ಈ ಸಮಿತಿಯ ವರದಿಯು ಶಿಕ್ಷಣ ವ್ಯವಸ್ಥೆಯಲ್ಲಿ ಜನ ಭರವಸೆ ಕಳೆದುಕೊಂಡಿರುವ ವಿಚಾರವನ್ನು, ವ್ಯವಸ್ಥೆಯ ಪಾಲುದಾರರಲ್ಲಿ ಇರಬೇಕಾದ ಉತ್ಸಾಹದ ಕೊರತೆಯನ್ನು "ಪರಿಣಾಮಕಾರಿ ನಿರ್ವಹಣೆಯ ವಿಧಾನವನ್ನು ಶಿಕ್ಷಣಕ್ಷೇತ್ರಕ್ಕೆ ಬರಮಾಡಿಕೊಳ್ಳುವ" (ಭಾಗ ೫.೧.೬) ಮೂಲಕ ಹಾಗು "ಪ್ರಾಚಾರ್ಯರು ಹಾಗು ಶಿಕ್ಷಕರ ಕೆಲಸಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ವಸ್ತುನಿಷ್ಠವಾದ ವ್ಯವಸ್ಥೆಗಳನ್ನು ಸ್ಥಾಪಿಸುವ" ಮೂಲಕ–ಚುಟುಕಾಗಿ ಹೇಳುವುದಾದರೆ, ಶಾಲಾ ಹಂತದಲ್ಲಿ ಸಮರ್ಪಕ ನಿರ್ವಹಣೆಯನ್ನು ತರುವ ಮೂಲಕ–ಸರಿಪಡಿಸಲು ಮುಂದಾಯಿತು.

ಶಿಕ್ಷಣ ವ್ಯವಸ್ಥೆಯಲ್ಲಿ ರಾಜಕೀಯ ಹಸ್ತಕ್ಷೇಪವನ್ನು ಕಡಿಮೆಮಾಡಿ, ಹೆಚ್ಚಿನ ಕ್ಷಮತೆಯನ್ನು ತರುವ ಸಮಿತಿಯ ಸಂಕಲ್ಪವೇ ಬಲಪಡಿಸಿದ ನಿಯಂತ್ರಣ ಹಾಗು ಉಸ್ತುವಾರಿ ಸಾಧನಗಳಿಂದ ಸುಸಜ್ಜಿತವಾಗಿ ಹೊಣೆಗಾರಿಕೆಗೆ (ವಿಶೇಷವಾಗಿ ಶಾಲಾಶಿಕ್ಷಣದಲ್ಲಿ ಪ್ರಾಚಾರ್ಯರು ಹಾಗು ಶಿಕ್ಷಕರ ಹೊಣೆಗಾರಿಕೆಗೆ) ಒತ್ತು ನೀಡುವ ನಿರ್ವಹಣಾತ್ಮಕ ವಿಧಾನವನ್ನು ಶಿಫಾರಸು ಮಾಡುವಂತೆ ಪ್ರೇರೇಪಿಸಿತು. ಅಷ್ಟರ ಮಟ್ಟಿಗೆ, ಈ ಸಮಿತಿಯು, ಭಾಗ ೫.೧.೧೬ರಲ್ಲಿ, " ವ್ಯವಸ್ಥೆಯಲ್ಲಿ ಪಾರದರ್ಶಕತೆಯನ್ನು ತರಲು ವರ್ಗಶ್ರೇಣಿಯ ಎಲ್ಲಾ ಪಾರ್ಶ್ವಗಳನ್ನೂ ಪರಿಶೀಲಿಸಬೇಕಿದ್ದು, ಕಾರ್ಯಾಚರಣೆಯಲ್ಲಿ ಸುಸ್ಪಷ್ಟ ಮಾನದಂಡಗಳಿರಬೇಕಿದೆ; ಮುಕ್ತ ವ್ಯವಸ್ಥೆಗಳ ಸ್ಥಾಪನೆ, ಅನುಸರಣೆಯ ಖಾತ್ರಿಗಾಗಿ ಸ್ವತಂತ್ರ ಬಾಹ್ಯ ತಪಾಸಣೆ ಹಾಗು, ಇವೆಲ್ಲವನ್ನೂ ಸಾಧಿಸಲು ಮಾಹಿತಿ ತಂತ್ರಜ್ಞಾನದ ಸೂಕ್ತ ಬಳಕೆಯಾಗಬೇಕಿದೆ" ಎಂದು ಹೇಳಿತಲ್ಲದೆ, ಮುಂದುವರಿದು, "ಗುಣಮಟ್ಟದ ಮೇಲ್ವಿಚಾರಣೆಯನ್ನು ಪರಿಣಾಮಕಾರಿಯಾಗಿ ನೋಡಿಕೊಳ್ಳುವ ವ್ಯವಸ್ಥೆಯ ನಿರ್ಮಾಣವಾಗಬೇಕಿದೆ, ಹೋಬಳಿ/ಜಿಲ್ಲೆ/ರಾಜ್ಯ ಮಟ್ಟಗಳಲ್ಲಿ ಒಂದೇ ಮಟ್ಟದ ನಿರ್ವಹಣೆಯ ವ್ಯವಸ್ಥೆಯ ಅಡಿಯಲ್ಲಿ ಬರುವ ಶಾಲೆಗಳ ನಡುವೆ ಸಂಪರ್ಕ ಸಾಧಿಸಬೇಕಿದೆ; ಹೊಸ ಸಂಸ್ಥೆಗಳಿಗೆ ಅನುಮತಿ ನೀಡುವ, ಅವುಗಳ ನಿಯಮಿತ ಮೌಲ್ಯಾಂಕನ ಮಾಡುವ ಹಾಗು ಅವುಗಳನ್ನು ತನ್ನ ಅಂಗಸಂಸ್ಥೆಗಳನ್ನಾಗಿಸುವ ನೂತನ ಪಾರದರ್ಶಕ ವ್ಯವಸ್ಥೆಯನ್ನು ಸ್ಥಾಪಿಸಬೇಕಿದ್ದು, ಅದರ ಪಾರದರ್ಶಕ ಪ್ರಕ್ರಿಯೆಗಳು ನಿಶ್ಚಿತವಾಗಿ ಸ್ಥಾಪಿತವಾದ ತತ್ತ್ವಗಳ ಆಧಾರದ ಮೇಲೆ, ಪೂರ್ಣರೂಪದ ಸಾರ್ವಜನಿಕ ಬಹಿರಂಗಪಡಿಸುವಿಕೆಗೆ ಒಳಗಾಗಿದ್ದು, ಪ್ರಕ್ರಿಯೆಯ ಪ್ರತಿ ಹಂತದಲ್ಲೂ ಹೊಣೆಗಾರಿಕೆಯು ಸ್ಫುಟವಾಗಿ ಗೋಚರವಾಗುವಂತೆ ನಡೆಯಬೇಕಿದೆ.

ನೂತನ ಸಾರ್ವಜನಿಕ ನಿರ್ವಹಣೆಯ ಮೂರು ಸ್ತಂಭಗಳಾದ (ಬುಷರ್, ೧೯೯೪)–ಪಾರದರ್ಶಕತೆ, ಹೊಣೆಗಾರಿಕೆ ಹಾಗು ಕಾರ್ಯಾಚರಣೆಗಳ ದಕ್ಷತೆಗಳು ಸಮಿತಿಯ ಆಶಾವಾದವಾದ, "ಶಿಕ್ಷಣಕ್ಷೇತ್ರದ ಪ್ರತಿ ಅಂಗದ ಆಡಳಿತದಲ್ಲೂ ಮಾಹಿತಿ ತಂತ್ರಜ್ಞಾನದ ಔಚಿತ್ಯಪೂರ್ಣ ಬಳಕೆ"ಯೊಂದಿಗೆ ಬೆಸೆದುಕೊಂಡಿದೆ. ಸಮಿತಿಯು ಮುಂದುವರಿದು, "ಮೇಲೆ ವಿಶದಪಡಿಸಿರುವ ದಿಸೆಗಳಲ್ಲಿ ಗಣನೀಯ ಹೆಜ್ಜೆಗಳನ್ನು ಇಟ್ಟಲ್ಲಿ, ಆಡಳಿತದ ಗುಣಮಟ್ಟವು ತೀವ್ರ ಸುಧಾರಣೆ ಕಾಣುವುದೇ ಅಲ್ಲದೆ, ತತ್ಪರಿಣಾಮವಾಗಿ ಶಿಕ್ಷಣದ ಗುಣಮಟ್ಟದಲ್ಲಿ ಗಮನಾರ್ಹ ಪ್ರಗತಿ"ಯನ್ನು ಕಾಣುವಂತಾದರೆ ಸಮಿತಿಯ ಬಯಕೆ ಈಡೇರಿದಂತೆ ಎಂದೂ ಹೇಳುತ್ತದೆ. (ಪುಟ 42) ಸಮಿತಿಯು ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನದಲ್ಲಿ ಹಾಗು ಶಾಲೆಯ ಆಡಳಿತವನ್ನು ಗಣನೀಯವಾಗಿ ಬದಲಾಯಿಸುವ ಅದರ ಸಾಮರ್ಥ್ಯದಲ್ಲಿ ಅಗಾಧ ಭರವಸೆಯಿರಿಸಿ, "ಇದು ಸಾರ್ವಜನಿಕವಾಗಿ ಲಭ್ಯವಿರುವಂದು ಈ ವ್ಯವಸ್ಥೆಗೆ ಮಹತ್ತರ ಬದಲಾವಣೆಯನ್ನು ತರಬಲ್ಲ ಸಾಮರ್ಥ್ಯವಿದೆ" ಎಂದು ಹೇಳುತ್ತದೆ (ಭಾಗ, ೫.೨.೩೫). ಪ್ರತಿ ಶಾಲೆಯ, ಕಾಲೇಜಿನ ಅಥವಾ ವಿಶ್ವವಿದ್ಯಾಲಯ/ಉನ್ನತ ಶಿಕ್ಷಣಸಂಸ್ಥೆಯ ಪ್ರತಿ ವಿದ್ಯಾರ್ಥಿ, ಪ್ರತಿ ಶಿಕ್ಷಕ, ಪ್ರಾಚಾರ್ಯ ಹಾಗು ಶಾಲೆಗೂ ಒಂದು ಅನನ್ಯ ಚಹರೆ ನೀಡಿ, ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಯ, ಕಲಿಕೆಗಾಗಿ ಶಿಕ್ಷಕರ ಕೊಡುಗೆಯ, ಶೈಕ್ಷಣಿಕ ಪ್ರಕ್ರಿಯೆಯಲ್ಲಿ ಪ್ರಾಚಾರ್ಯರ ಕಾರ್ಯಕ್ಷಮತೆಯ ಹಾಗು ಶಾಲೆ/ಸಂಸ್ಥೆಯ ಪಾತ್ರದ ಮೇಲ್ವಿಚಾರಣೆಯನ್ನು ಪ್ರಕ್ರಿಯೆಯು ಪ್ರಚಲಿತದಲ್ಲಿರುವಾಗಲೇ ಮಾಡಬಹುದು ಎನ್ನುತ್ತದೆ. ಶಿಕ್ಷಣ ಪ್ರಕ್ರಿಯೆಯನ್ನು ಅಸಾಧಾರಣವಾಗಿ ಮುಕ್ತವೂ, ಪಾರದರ್ಶಕವೂ ಆದ ರೀತಿಯಲ್ಲಿ ಸುಧಾರಿಸಲು ಇದೊಂದು ಅತ್ಯಂತ ಪ್ರಭಾವೀ ಮೇಲ್ವಿಚಾರಣೆ ಹಾಗು ನಿರ್ವಹಣೆಗಳ ಸಾಧನವಾಗಬಹುದು.

ಶಿಕ್ಷಣವ್ಯವಸ್ಥೆಯಲ್ಲಿ, ಅದರಲ್ಲೂ ವಿಶೇಷವಾಗಿ ಶಿಕ್ಷಕರಲ್ಲಿ ಜನರ ವಿಶ್ವಾಸವನ್ನು ಮರು ಸ್ಥಾಪಿಸುವತ್ತ ಸಮಿತಿಯು ಗಮನವನ್ನು ಕೇಂದ್ರೀಕರಿಸಿದ್ದು, ಆ ಗುರಿಯನ್ನು ಪರಿಚಿತ ಆಡಳಿತಾತ್ಮಕ ಉದ್ದೇಶಗಳ ಪಾರ್ಶ್ವದಿಂದ ಸಾರಲು ಮುಂದಾಗುತ್ತದೆ. ಈ ಪ್ರಯಾಸವು ಅಧಿಕಾರಶಾಹಿಯನ್ನು ಬಲಪಡಿಸುವ, ಆದರೆ, ಅದೇ ಸಮಯಕ್ಕೆ ಹೊಣೆಗಾರಿಕೆ, ಪಾರದರ್ಶಕತೆ ಹಾಗು ದಕ್ಷತೆಗಳೆಂಬ ಹೊಸ

ಸಾರ್ವಜನಿಕ ನಿರ್ವಹಣೆಯ ಮಂತ್ರದ ಮೂಲಕ ಅಧಿಕಾರಶಾಹಿಯ ಕೆಲವು ಕೊರತೆಗಳನ್ನು ಸರಿಪಡಿಸುವುದೇ ಆಗಿದೆ. ಸಮಿತಿಯು ಶಿಕ್ಷಕರ ನೇಮಕಾತಿ, ಆಯ್ಕೆ, ನಿಯೋಜನೆ ಹಾಗು ವರ್ಗಾವಣೆಗಳ ವಿಚಾರವಾಗಿ ಕೆಲವು ಪ್ರಮಾಣೀಕೃತ ವಿಧಾನಗಳನ್ನು; ಶಿಕ್ಷಕರ ಸೇವೆಗೆ ಸಂಬಂಧಿಸಿದ ವಿಷಯಗಳನ್ನು ಬಗೆಹರಿಸಲು ವಿಶೇಷ ಶೈಕ್ಷಣಿಕ ನ್ಯಾಯಮಂಡಲಿಗಳ ಸ್ಥಾಪನೆಯನ್ನು; ಶಿಸ್ತು-ಸಂಬಂಧಿ ಅಧಿಕಾರವನ್ನು ನೀಡಲಾದ ಶಾಲಾ ಪ್ರಾಚಾರ್ಯರ ಒಂದು ವಿಶಿಷ್ಟ ತಂಡದ ಸೃಷ್ಟಿಯನ್ನು ಹಾಗು ಉಳಿದ ಹೆಚ್ಚುವರಿ ಅಧಿಕಾರವನ್ನು ಶಾಲಾನಿರ್ವಹಣಾ ಸಮಿತಿಗಳಿಗೆ ನೀಡುವುದನ್ನೂ ಶಿಫಾರಸು ಮಾಡುತ್ತದೆ. ಜೊತೆಗೆ, ಶಿಕ್ಷಕರ ಮೇಲ್ವಿಚಾರಣೆಗೆ ಹಾಗು ವಿದ್ಯಾರ್ಥಿಗಳ ಫಲಿತಾಂಶಗಳನ್ನು ಶಿಕ್ಷಕರ ಕಾರ್ಯಕ್ಷಮತೆಯೊಂದಿಗೆ ಸಂಯೋಜಿಸಲು ಮಾಹಿತಿ ಹಾಗು ಸಂಪರ್ಕ ತಂತ್ರಜ್ಞಾನಗಳನ್ನು ಬಳಸುವಂತೆ; ಶಿಕ್ಷಕರು ಹಾಗು ಪ್ರಾಚಾರ್ಯರು ಪರವಾನಗಿಗಳನ್ನು ಪಡೆಯುವಂತೆ ಅವರಿಗೆ ಕಡ್ಡಾಯ ತರಬೇತಿ ನೀಡುವಂತೆ ಹಾಗು ಅಂಗೀಕೃತ ಮಾನದಂಡಗಳ ತಳಹದಿಯ ಮೇಲೆ ಕಡ್ಡಾಯವಾಗಿ ಮಾಡತಕ್ಕ ಶಾಲಾ ಮೌಲ್ಯಮಾಪನಗಳಿಗೆ ಶಿಕ್ಷಕರನ್ನೂ, ಪ್ರಾಚಾರ್ಯರನ್ನೂ ಹೊಣೆಗಾರರನ್ನಾಗಿಸುವಂತೆ ಶಿಫಾರಸು ಮಾಡುತ್ತದೆ.

೧೯೮೦ ಹಾಗು ೯೦ರ ದಶಕಗಳಲ್ಲಿ ಅನೇಕ ದೇಶಗಳು ಈ ವಿಧಾನಗಳನ್ನು ಬಳಸಿಕೊಂಡು ಸೋಲುಕಾಣುತ್ತಿದ್ದ ಸಾರ್ವಜನಿಕ ವಲಯದ ಸೇವೆಗಳಿಗೆ ಮಾರುಕಟ್ಟೆ ದಕ್ಷತೆಯ ವಾದಗಳನ್ನು ಅಳವಡಿಸಲು ಮುಂದಾಗಿವೆ (ಒಕ್ವಾನ್, ೧೯೯೪; ಬಾಸ್ಟನ್, ಮಾರ್ಟಿನ್, ಪ್ಯಾಲಟ್ ಹಾಗು ವಾಲ್ಷ್, ೧೯೯೬). ಆದರೂ, ಅಂತಹ ಹೊಣೆಗಾರಿಕೆಯ ಕ್ರಮಗಳನ್ನು ಜಾರಿಮಾಡಲು ಪ್ರಯತ್ನಿಸಿದ ದೇಶಗಳು ಹಾಗು ವ್ಯವಸ್ಥೆಗಳು ಸ್ವಾಯತ್ತೆಯ ವಿಚಾರಗಳನ್ನು ಒಳಗೊಂಡಿದ್ದವಲ್ಲದೆ, ನಿರ್ವಹಣೆ ಹಾಗು ನಿರ್ಧಾರಗಳನ್ನು ಶಾಲೆಗಳಿಗೇ ಬಿಟ್ಟಿದ್ದವು. ದೇಶದಲ್ಲಿ ಕುಸಿಯುತ್ತಿರುವ ಶಿಕ್ಷಣದ ಗುಣಮಟ್ಟದ ಬಗ್ಗೆ ಅತಿಶಯ ಆತಂಕಾನುಭದೊಂದಿಗೆ ಶಿಕ್ಷಣಕ್ಷೇತ್ರವು ರಾಜಕೀಯದ ಪಟ್ಟಭದ್ರ ಹಿತಾಸಕ್ತಿಗಳ ಕಪಿಮುಷ್ಟಿಗೆ ಸಿಲುಕಿ ಅತಿಯಾಗಿ ರಾಜಕೀಯ ಪ್ರಭಾವಕ್ಕೊಳಗಾಗುತ್ತಿರುವುದರ, ಲಾಭಕ್ಕಾಗಿ ಹಪಹಪಿಸುತ್ತಿರುವುದರ ಬಗ್ಗೆ ಹತಾಶೆ ಒಂದೆಡೆಯಾದರೆ; ಮತ್ತೊಂದೆಡೆ, ಶಿಕ್ಷಣವ್ಯವಸ್ಥೆಯಲ್ಲಿ ಶಿಕ್ಷಕರು ಮತ್ತು ಪ್ರಾಚಾರ್ಯರ ಸಾಮರ್ಥ್ಯದಲ್ಲಿ ಭರವಸೆ ಇಲ್ಲದೇ ಹೋಗಿರುವುದು-ಈ ಎಲ್ಲವೂ ಜತೆಗೂಡಿ ನಿಯಂತ್ರಣಾಧಾರಿತ ಯಾಂತ್ರಿಕರೂಪದ ಆಡಳಿತಾತ್ಮಕ ವಿಧಾನವನ್ನು, (ರೋವಾನ್, 1990) ಯಾವುದೇ ಸ್ವಾಯತ್ತತೆಗಾಗಲೀ, "ನಿರ್ವಹಣಾತ್ಮಕ" ಪರ್ಯಾಯ ಪರಿಕಲ್ಪನೆಗಳಿಗಾಗಲೀ ಎಡೆಯೇ ಇಲ್ಲವೆಂಬಂತೆ ಶಿಫಾರಸು ಮಾಡಲು ಸಮಿತಿಯನ್ನು ನಿರ್ಬಂಧಿಸಿರುವಂತೆ ತೋರುತ್ತದೆ. ಶಿಕ್ಷಕ ವೃತ್ತಿಯ ಬಗ್ಗೆಗಿನ ವಿಶ್ವಾಸವನ್ನು ಪುನಃ ಸ್ಥಾಪಿಸುವ ಬಗ್ಗೆ ಸಮಿತಿಯು ಸಂಕ್ಷೇಪವಾಗಿ ಹೇಳುತ್ತದಾದರೂ, ಶಿಕ್ಷಣವಲಯದ ವಿಶಿಷ್ಟತೆಗಳಿಗೆ ಗಮನಕೊಡದೇ ಇದ್ದು ನಿರ್ವಹಣಾತ್ಮಕ ತತ್ತ್ವಗಳ ಏಕ-ಆಯಾಮದ ಪ್ರಯೋಗಕ್ಕೆ ಮುಂದಾಗಿರುವುದು ಈ ವರದಿಯಲ್ಲಿ ಕಂಡುಬರುವ ಗಂಭೀರ ಕೊರತೆ. ಬೋಧನೆ ಎಂಬುದು ಒಂದು ಸಂಕೀರ್ಣ ಚಟುವಟಿಕೆ; ಅದು ಬೋಧನಾಪ್ರಕ್ರಿಯೆಯ ನಡುವೆಯೇ ತರಗತಿಯಲ್ಲಿ ಮಕ್ಕಳ ಕಲಿಕೆಗೆ ನಿಮಿತ್ತವಾಗುವ ನಿರ್ಧಾರಗಳನ್ನು ತೆಗೆದುಕೊಳ್ಳುವ ಅಗತ್ಯವನ್ನು ತಂದೊಡ್ಡುತ್ತದೆ. ಬೋಧನೆಯ ಈ ಸ್ವರೂಪವು ಮಕ್ಕಳ ಅಗತ್ಯಗಳಿಗೆ ತಕ್ಕಂತೆ ಹಾಗು ಶಾಲೆಯ ವಿಶಿಷ್ಟ ಸಂದರ್ಭಕ್ಕೆ ಹೊಂದಿಕೊಳ್ಳುವಂತೆ ಬೋಧನೆಯ ವಿಷಯವನ್ನು, ಬೋಧನಕಲೆಯನ್ನು, ಮೌಲ್ಯಾಂಕನವನ್ನು ಹಾಗು ಬೋಧನೆಯ ಪ್ರಕ್ರಿಯೆಗಳನ್ನು ರೂಪಿಸಿಕೊಳ್ಳುವಂತಹ ಸ್ವಾಯತ್ತತೆಯ ಅಗತ್ಯ ಶಿಕ್ಷಕರಿಗೆ ಇದೆ ಎಂದು ಪ್ರತಿಪಾದಿಸುತ್ತದೆ. ಅಂತಹ ವೃತ್ತಿಯು "ನಿಯಂತ್ರಣ ಮತ್ತು ಮೌಲ್ಯಾಂಕನ"ದಂತಹ (control and evaluate) ಯಾಂತ್ರಿಕ ಪ್ರತಿಕ್ರಿಯೆಗಳ ಅಗತ್ಯವನ್ನು ಆಗ್ರಹಿಸದು; ಬದಲಿಗೆ, ಶಿಕ್ಷಕರ ಪ್ರಾಮುಖ್ಯವನ್ನು ಗುರುತಿಸುವ ಪರ್ಯಾಯ ವಿಧಾನಗಳನ್ನು ಹಾಗು ಶಿಕ್ಷಕರು ತಮ್ಮ ಕರ್ತವ್ಯವನ್ನು ಪರಿಣಾಮಕಾರಿಯಾಗಿ ಪೂರೈಸುವುದಕ್ಕೆ ನಿಸ್ಸಂದೇಹವಾಗಿ ಅಗತ್ಯವಿರುವ ನೆರವನ್ನು ಬೇಡುತ್ತದೆ. ಇದರಿಂದ ನಮ್ಮ ಗಮನವು ಇತರೆ ನಿರ್ವಹಣಾತ್ಮಕ ರೂಪಗಳಿಗೆ ಮುಖಮಾಡುವುದು ಅನಿವಾರ್ಯವಾಗುತ್ತದೆ; ಉದಾಹರಣೆಗೆ, ಅದು ನಿಯಂತ್ರಣದಂತಹ ವ್ಯವಸ್ಥೆಯಾಗಿರದೆ, ಬಾಧ್ಯತೆಯ ಆಧಾರದ ಮೇಲೆ ನಿರ್ಮಿಸಲಾದ ಸಜೀವ ವ್ಯವಸ್ಥೆಗಳಾಗಿರಬಹುದು (ರೋವನ್, ೧೯೯೦).

ಸಮಿತಿಯ ವರದಿಯಾದರೋ, ಶಿಕ್ಷಕ-ಸಹಕಾರ, ಸಹೋದ್ಯೋಗಿಗಳ ಮೌಲ್ಯಾಂಕನ ಮತ್ತು ಸ್ವ-ಮೌಲ್ಯಾಂಕನ, ಸಹಕಾರದ ಮನೋಭಾವ, ಶಿಕ್ಷಕ ಕಲಿಕೆಯ ಬಳಗಗಳು, ಕಲೆತು ನಿರ್ಣಯಿಸುವ ಪ್ರಕ್ರಿಯೆ, ಶಿಕ್ಷಕ ನಾಯಕತ್ವ ಅಥವಾ ಕಲೆತು ಉದ್ದೇಶಸಾಧನೆ ಮತ್ತು ಶಾಲಾಸಂಸ್ಕೃತಿಗಳ ನಿರ್ಮಾಣ ಇಂಥ ವಿಚಾರಗಳ ಬಗ್ಗೆ ಮೌನ ತಳೆಯುತ್ತದೆ. ಶಿಕ್ಷಕರ ಗೈರುಹಾಜರಿ, ಅವರ ಕರ್ತವ್ಯ

ವಿಮುಖತೆ ಹಾಗು ಅವರ ದೃಷ್ಟಿಕೋನವು ಕ್ರಮೇಣ ರಾಜಕೀಯ ಬಣ್ಣ ಪಡೆಯುವಂತಹ ಸಂಗತಿಗಳನ್ನು ಕುಗ್ಗಿಸುವ ಭರದಲ್ಲಿ ಶಾಲಾ ನಿರ್ವಹಣೆಯ ವಿಚಾರದಲ್ಲಿ ಹೆಚ್ಚು ಕಾರ್ಯಸಾಧುವೂ, ಪ್ರಜಾಸತ್ತಾತ್ಮಕವೂ ಆದ ವಿಧಾನಗಳನ್ನು ಕಡೆಗಣಿಸಿದೆ ಎನ್ನಬಹುದು. ಇದಕ್ಕೆ ವ್ಯತಿರಿಕ್ತವಾಗಿ, ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ಸಾಧ್ಯವಾಗಿಸುವ ಕಣ್ಗಾವಲಿನ ಆಡಳಿತವನ್ನು, ಅಧಿಕಾರಶಾಹಿಯ ಕೈಯಲ್ಲಿ ಬಲಪಡಿಸಲಾದ ಮೇಲ್ವಿಚಾರಣೆಯ ವಿಧಾನಗಳನ್ನು ನೀಡುವುದನ್ನೇ ಶಾಲಾ ಶಿಕ್ಷಣ ಹಾಗು ವಿದ್ಯಾರ್ಥಿಗಳ ಕಲಿಕಾ ಫಲಿತಾಂಶಗಳನ್ನು ಸುಧಾರಿಸುವ ತಂತ್ರವನ್ನಾಗಿ ಬಳಸಲು ಹವಣಿಸುತ್ತಿದೆ. ಶಾಲೆಯ ಹಂತದಲ್ಲಿ ಮಕ್ಕಳ ಕಲಿಕಾ ಫಲಿತಾಂಶಗಳನ್ನು ಸುಧಾರಿಸಲು ಶಿಕ್ಷಕರಿಗೆ ಮತ್ತು ಪ್ರಾಚಾರ್ಯರಿಗೆ ಅಗತ್ಯವಿರುವ ಸ್ವಾಯತ್ತತೆಗೆ ಎಡೆಮಾಡದೆ ಬಾಧ್ಯತೆಯನ್ನಷ್ಟೇ ಬೆಂಬತ್ತಿದರೆ "ನಿಯಂತ್ರಿತ ವಿನಿಯಂತ್ರಣ" (controlled decontrol ) ಎಂದು ಹೇಳಲಾಗುವ ಪರಿಸ್ಥಿತಿಗೆ ಕಾರಣವಾಗುತ್ತದೆ.

ನಿರ್ವಹಣೆಗೆ ಸಂಬಂಧಪಟ್ಟ ಶಿಫಾರಸುಗಳಲ್ಲಿ ಅತಿಯಾದ ಮೇಲ್ವಿಚಾರಣೆ ಹಾಗು ನಿಯಂತ್ರಣಗಳನ್ನು ಪ್ರತಿಪಾದಿಸುತ್ತದೆ ಎಂದು ಈ ಸಮಿತಿಯ ವರದಿಯನ್ನು ಖಂಡಿಸಬಹುದಾದರೂ, ಶಿಕ್ಷಣ ವ್ಯವಸ್ಥೆಯ ಎಲ್ಲಾ ಹಂತಗಳಲ್ಲೂ ಕಂಡುಬರುವ ಭ್ರಷ್ಟಾಚಾರ ಹಾಗು ರಾಜಕೀಯ ಹಸ್ತಕ್ಷೇಪಗಳನ್ನು ಸುಸ್ಪಷ್ಟವಾಗಿ ಈ ಸಮಿತಿಯು ಗಮನಿಸಿರುವುದರ ಜೊತೆಗೆ ಈ ಅನಿಷ್ಟವನ್ನು ಕಡಿಮೆಗೊಳಿಸುವ ಸಂಕಲ್ಪವೇ ಈ ರೀತಿಯ ಶಿಫಾರಸಿಗೆ ಕಾರಣ ಎಂಬುದಂತೂ ಸ್ಫುಟವಾಗಿದೆ. ಆದಾಗ್ಯೂ, ಸಮಿತಿಯ ಈ ಆತಂಕಗಳನ್ನಾಗಲೀ, ತೀರ್ಮಾನಗಳನ್ನಾಗಲೀ ಮಾನವ ಸಂಪನ್ಮೂಲ ಸಚಿವಾಲಯದ ಕಡತರೂಪದ ವರದಿಯು ನೀಡದೇ ಹೋಗುತ್ತದೆ. ನಿಜ ಹೇಳಬೇಕೆಂದರೆ, ಅದು ಸಮಿತಿಯ ವರದಿಯನ್ನು ಉಲ್ಲೇಖಿಸುವುದೇ ಇಲ್ಲ. ಕಡತರೂಪದ ವರದಿಯು ಯಾವುದು ಸರ್ಕಾರಿ ವ್ಯವಸ್ಥೆಯಲ್ಲಿ ಶಾಲೆಗಳ ಸೋಲು ಎಂದು "ಪರಿಗಣಿಸಲ್ಪಡುತ್ತಿದೆಯೋ" ಅದಕ್ಕೆ ಕಾರಣವಾಗುವ ಅಂಶಗಳನ್ನು ಎತ್ತಿತೋರಿಸುವ ಮೂಲಕ ಶಾಲಾಶಿಕ್ಷಣದ ಗುಣಮಟ್ಟದ ಸುಧಾರಣೆಯ ಅಗತ್ಯವನ್ನು ಈ ರೀತಿ ಒತ್ತಿಹೇಳುತ್ತದೆ: ಶಾಲೆಗಳಿಗೆ ನಿಗದಿಪಡಿಸಿರುವ ಮಾನದಂಡಗಳಿಗೆ ಹಾಗು ರೂಢಿಗಳಿಗೆ ವಿಧೇಯವಾಗಿರದ ಹೆಚ್ಚಿನ ಸಂಖ್ಯೆಯ ಶಾಲೆಗಳು; ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಗೈರು; ಶಿಕ್ಷಕರ ಪ್ರೇರಣೆಯಲ್ಲಿ ಮತ್ತು ತರಬೇತಿಯಲ್ಲಿ ಕಂಡುಬರುವ ಗಂಭೀರ ಸ್ವರೂಪದ ಅಂತರಗಳು ಹಾಗು ಅದರ ಪರಿಣಾಮ ಸ್ವರೂಪದ ಶಿಕ್ಷಕರ ಗುಣಮಟ್ಟ ಮತ್ತು ಕಾರ್ಯಕ್ಷಮತೆಗೆ ಸಂಬಂಧಿಸಿದ ಕೊರತೆಗಳು; ಶಿಕ್ಷಣದಲ್ಲಿ ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನದ ಬಳಕೆ ತ್ವರಿತ ಪ್ರಗತಿ ಕಾಣದಿರುವುದು; ಕಾರ್ಯಪಡೆಯನ್ನು ಬಯಸಿದ ಮಟ್ಟಕ್ಕೆ ನಿರ್ವಹಿಸಲಾಗದಿರುವುದು; ಕಾರ್ಯಕ್ಷಮತೆಯ ವಿಚಾರವಾಗಿ ಮೇಲ್ವಿಚಾರಣೆಯ ಕೊರತೆ ಹಾಗು ಉಸ್ತುವಾರಿಗೆ ತಕ್ಕಮಟ್ಟಿನ ಗಮನಹರಿಸದೇ ಇರುವುದು, ಇತ್ಯಾದಿ." (ಪು. ೮). ನೀತಿ ಕಡತವಾದರೋ ಇಂತಹ ನಿರ್ವಹಣಾತ್ಮಕ ಪ್ರಕ್ರಿಯೆಗಳ ವಿಚಾರದಲ್ಲಿ ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನದ ಬಳಕೆಯ ಮೂಲಕ ಸಮಸ್ಯೆಗೆ ಪರಿಹಾರವನ್ನು ಅರಸುತ್ತದೆ. ಶಿಕ್ಷಕರಿಗೆ ಹಾಗು ಪ್ರಾಚಾರ್ಯರಿಗೆ ಕಡ್ಡಾಯರೂಪದ ತರಬೇತಿಯ ಅಗತ್ಯವನ್ನು ಮತ್ತೆ-ಮತ್ತೆ ಒತ್ತಿಹೇಳುತ್ತಾ, "ಗೈರುಹಾಜರಾಗುವ ಶಿಕ್ಷಕರು ಹಾಗು ಪ್ರಾಚಾರ್ಯರ ವಿರುದ್ಧ ಶಿಸ್ತಿನ ಕ್ರಮ ತೆಗೆದುಕೊಳ್ಳಲು ಶಾಲಾ ನಿರ್ವಹಣಾ ಸಮಿತಿಗಳಿಗೆ ಅಧಿಕಾರ ನೀಡು"ವುದನ್ನು ಪುನರುಚ್ಚರಿಸಿ ವಾಕ್ಪಟುತೆಯನ್ನು ಮೆರೆಯುತ್ತದೆ, ಅಷ್ಟೇ. ಇದರ ಜೊತೆಗೆ, ಸಮಿತಿಯ ಸಲಹೆಯಂತೆ ತರಬೇತಿ ಪಡೆದ (ತರಬೇತಿಯ ಸ್ವರೂಪ ಸ್ಪಷ್ಟವಿರದಿದ್ದರೂ) ನಿಷ್ಠಾವಂತ ಶಾಲಾ ಪ್ರಾಚಾರ್ಯರ ತಂಡದ ಅಗತ್ಯವನ್ನು ಕರಡು ನೀತಿಯು ಅಂಗೀಕರಿಸುತ್ತದೆ.

ಆದರೆ ಸಮಿತಿಯ ವರದಿಯು ಶಿಕ್ಷಣವ್ಯವಸ್ಥೆಯು ಎದುರಿಸುತ್ತಿರುವ ವಿಶ್ವಾಸದ ಕೊರತೆಯನ್ನು ಸ್ಪಷ್ಟವಾಗಿ ಗುರುತಿಸಿದ್ದರೂ, ಈ ಮೂಲಭೂತ ಸಮಸ್ಯೆಯನ್ನು ಕರಡು ನೀತಿಯು ನಿರ್ಲಕ್ಷಿಸುತ್ತದೆ. ಶಿಕ್ಷಣವ್ಯವಸ್ಥೆಯು ಇಂದು ಎದುರಿಸುತ್ತಿರುವ ಸಾಂಸ್ಥಿಕ ನ್ಯಾಯಬದ್ಧತೆಯ ಅಭಾವದ ಸಮಸ್ಯೆಯನ್ನು ಉಪೇಕ್ಷಿಸಲು ನಿರ್ಧರಿಸುವ ಮೂಲಕ ಶಾಲಾವ್ಯವಸ್ಥೆಯಲ್ಲಿ ಬದಲಾವಣೆಗಳಾಗಲೀ, ಶೈಕ್ಷಣಿಕ ಸುಧಾರಣೆಯಾಗಲೀ ಯಾವ ರೀತಿ ಆಗುತ್ತದೆ ಎಂದು ಅನುಭವಜನ್ಯ ಅರಿವು ಶ್ರುತಪಡಿಸುವ ಮಾರ್ಗದರ್ಶನವನ್ನು ಕರಡು ನೀತಿಯು ಒಪ್ಪಿಕೊಳ್ಳುವುದೂ ಇಲ್ಲ, ಅಳವಡಿಸಿಕೊಳ್ಳಲೂ ಇಚ್ಛಿಸುವುದಿಲ್ಲ. ಶಿಕ್ಷಣವ್ಯವಸ್ಥೆಯಲ್ಲಿ ಶಿಕ್ಷಕನ ಮೂಲಭೂತ ನೈತಿಕ ಪಾತ್ರ, ಅಸ್ಮಿತೆ ಹಾಗು ಸ್ವಾಯತ್ತತೆಗಳ ಬಗ್ಗೆ ಅದು ತಲೆಕೆಡಿಸಿಕೊಂಡಿಲ್ಲ. ಶಿಕ್ಷಕರ ತರಬೇತಿಯನ್ನು ಪ್ರಸ್ತಾವಿಸಲಾಗಿದ್ದರೂ, ಶಿಕ್ಷಕವೃತ್ತಿಯನ್ನಾಗಲೀ, ಶಿಕ್ಷಕರು ಸಂಕೀರ್ಣ ಕ್ಷೇತ್ರವೊಂದರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ವೃತ್ತಿಗಾರರು ಎಂಬ ಪರಿಕಲ್ಪನೆಗಾಗಲೀ ಯಾವುದೇ ಪ್ರಾಮುಖ್ಯ ನೀಡಿಲ್ಲ. ಕರಡು ನೀತಿಯ ವರದಿಯ ಸಲಹೆಗಳು ಶಿಕ್ಷಕರ "ನಿರ್ವಹಣೆ"ಯ ವಿಚಾರವಾಗಿ ಮೇಲುಮೇಲಿನ

ಪ್ರತಿಕ್ರಿಯೆಯನ್ನು ಸೂಚಿಸುತ್ತವೆಯೇ ಹೊರತು ಸಾರಭೂತ ಸಂಗತಿಯಾದ ಶಿಕ್ಷಕರ ಶೈಕ್ಷಣಿಕ ವಿಕಾಸವನ್ನು ಕಡೆಗಣಿಸಿದೆ.

ಅದು, ಶಿಕ್ಷಕರ ಶಿಕ್ಷಣವನ್ನು, ಶಿಕ್ಷಕರ ಅರ್ಹತೆಯನ್ನು ಹಾಗು ಶಾಲಾ ನಿರ್ವಹಣೆಗಳನ್ನು ಬಲಪಡಿಸುವ ಅಗತ್ಯವಿದೆ ಎಂದಷ್ಟೇ ತಿಳಿಸಿ ಸುಮ್ಮನಾಗುತ್ತದೆ. ಇಷ್ಟಾಗ್ಯೂ, ಜಗತ್ತಿನ ಉದ್ದಗಲಕ್ಕೂ ದೊರೆಯುವ ಸಾಕ್ಷ್ಯಾಧಾರವಾದರೋ, ಸನ್ನಿವೇಶಗಳಿಗೆ ಪ್ರಸ್ತುತವಾಗುವ ಹಾಗು ಮಕ್ಕಳಿಗೆ ಅರ್ಥಪೂರ್ಣವಾಗುವಂತಹ ನಿರ್ಧಾರಗಳನ್ನು ತೆಗೆದುಕೊಳ್ಳಲು ಶಾಲೆಗಳಿಗೆ ಸಾಧ್ಯವಾದಾಗ ಹಾಗು ಎಲ್ಲಾ ಮಕ್ಕಳು ಕಲಿಯುವುದನ್ನು ಖಾತ್ರಿಪಡಿಸುವ ತಮ್ಮ ಪ್ರಯತ್ನಗಳಿಗೆ ಬೆಂಬಲ ಇದೆ ಎಂದು ಶಿಕ್ಷಕರು ಬಗೆದಾಗ ಇದನ್ನು ಅತ್ಯುತ್ತಮ ರೀತಿಯಲ್ಲಿ ಸಾಧಿಸಬಹುದು ಎನ್ನುತ್ತದೆ. ಇದು ಶಾಲೆ ಹಾಗು ಶಿಕ್ಷಕರ ಸ್ವಾಯತ್ತತೆಯನ್ನು, ಶಾಲೆಯ ಎಲ್ಲ ಪಾಲುದಾರರ ನಡುವೆ ಸಮಾನ ವೈಚಾರಿಕ ದೃಷ್ಟಿಕೋನದ ವಿಕಾಸವನ್ನು, ಕಲಿಕೆಯನ್ನು ಪ್ರೋತ್ಸಾಹಿಸುವ ಬಲಸಂಪನ್ನ ಶಾಲಾಸಂಸ್ಕೃತಿಯನ್ನು ಹಾಗು ಶಾಲೆಯ ವಿಚಾರವಾಗಿ ತೆಗೆದುಕೊಳ್ಳಬೇಕಿರುವ ನಿರ್ಧಾರಗಳನ್ನು ಎಲ್ಲಾ ಪಾಲುದಾರರೂ ಕಲೆತು ತೆಗೆದುಕೊಳ್ಳುವಂತಹ ಸಹಯೋಗದ ವಾಡಿಕೆಗಳನ್ನು ಆಗ್ರಹಿಸುತ್ತದೆ. ನೀತಿ ಕರಡಾದರೋ ಶಿಕ್ಷಕರ ಸ್ವಾಯತ್ತತೆಯ ಬಗ್ಗೆ ಸೊಲ್ಲೇ ಎತ್ತುವುದಿಲ್ಲ; ವಿದ್ಯಾರ್ಥಿಗಳ ಕಲಿಕೆಗೂ, ಶಿಕ್ಷಕರ ಕಾರ್ಯಕ್ಷಮತೆಗೂ ಸಂಬಂಧಗಳನ್ನು ಕಲ್ಪಿಸಲು–ಅದೆಷ್ಟೇ ಸಮಸ್ಯಾತ್ಮಕವಾಗಿದ್ದರೂ–ಸಮಿತಿಯು ಪಡುತ್ತಿದ್ದ ಹರಸಾಹಸದ ಬಗ್ಗೆ ಕರಡು ವರದಿಯು ದಿವ್ಯನಿರ್ಲಕ್ಷ್ಯ ತಾಳಿದೆ. ಈ ವರದಿಯಲ್ಲಿ ಶಿಕ್ಷಕರ ನಿರ್ವಹಣಾ ಪ್ರಕ್ರಿಯೆಗಳನ್ನು ಬಲಪಡಿಸುವ ವಿಚಾರವಾಗಿ ಮಾಡಿರುವ ಶಿಫಾರಸುಗಳು ತಮ್ಮಷ್ಟಕ್ಕೇ ಮಕ್ಕಳ ಕಲಿಕೆಯ ಮಟ್ಟದಲ್ಲಾಗಲೀ, ಶಾಲೆಗಳ ಗುಣಮಟ್ಟದ ಸುಧಾರಣೆಯಲ್ಲಾಗಲೀ ಯಾವುದೇ ಮಹತ್ವದ ಮಾರ್ಪಾಡುಗಳನ್ನು ತರಲಾರದು ಎಂಬ ತಥ್ಯವನ್ನು ಮಾನವ ಸಂಪನ್ಮೂಲ ಸಚಿವಾಲಯವೇ ಗುರುತಿಸಿದೆ ಎಂಬುದನ್ನು ಇದು ಸೂಚಿಸುತ್ತದೆ.

ಶಿಕ್ಷಣದ ಗುರಿಗಳು, ಉದ್ದೇಶಗಳು, ಬೋಧನಕ್ರಿಯೆಯ ಸಂಕೀರ್ಣತೆ ಮತ್ತು ಶಿಕ್ಷಕರ ಕಾರ್ಯಕ್ಷಮತೆಗಾಗಿ ಅವರಿಗೆ ಅಗತ್ಯವಿರುವ ಬೆಂಬಲಗಳಂತಹ ವಿಚಾರಗಳ ಮೂಲಭೂತ ಅರಿವಿನ ಕೊಂಡಿಯನ್ನು ಈ ವರದಿಯು ತಾನು ಪ್ರತಿಪಾದಿಸುವ ನಿರ್ದಿಷ್ಟ ನಿರ್ವಹಣಾತ್ಮಕ ಹಾಗು ಆಡಳಿತಾತ್ಮಕ ಶಿಫಾರಸುಗಳಲ್ಲಿ ಕಳಚಿಕೊಂಡಿದೆ ಎನ್ನಬಹುದು. ಈ ಕರಡು ನೀತಿಯು ನಮ್ಮ ಶಿಕ್ಷಣವ್ಯವಸ್ಥೆಯನ್ನು ಕಾಡುತ್ತಿರುವ ರಾಜಕೀಯ ಶಕ್ತಿ ಹಾಗು ಹಸ್ತಕ್ಷೇಪಗಳ ಸಮಸ್ಯೆಯನ್ನು ಅಲಕ್ಷ್ಯ ಮಾಡುವುದೇ ಅಲ್ಲದೆ, ಯಾವುದೇ ಸುಧಾರಕ ಉಪಕ್ರಮಗಳ ಹಳಿ ತಪ್ಪಿಸಬಲ್ಲ ಈ ಮೂಲಭೂತ ಸಮಸ್ಯೆಗಳಿಗೆ ಪರಿಹಾರ ಹುಡುಕಲು ಸಂಕಲ್ಪ ತೋರುವುದೇ ಇಲ್ಲ. ಇಂತಹ ಅಗಾಧ ಅಂತರಗಳಿರುವಾಗ, ವ್ಯವಸ್ಥೆಯ ಶ್ರೇಣಿಗಳಲ್ಲಿ ಹೆಚ್ಚಿನ ಮೇಲ್ವಿಚಾರಣೆಯ ಹಾಗು ನಿಯಂತ್ರಣದ ಅಧಿಕಾರಗಳಾಗಲೀ, ಮಾಹಿತಿ ಹಾಗು ಸಂಪರ್ಕ ತಂತ್ರಜ್ಞಾನವು ಪಾರದರ್ಶಕ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಹಾಯ ನೀಡುವುದೆಂಬ ನೆಚ್ಚಿಕೆಯಾಗಲೀ, ವಿದ್ಯಾರ್ಥಿಗಳ ಕಲಿಕೆಯಲ್ಲಿ ಹಾಗು ದೇಶದ ಶಾಲಾಶಿಕ್ಷಣದ ಗುಣಮಟ್ಟದಲ್ಲಿ ಸುಧಾರಣೆಗಳನ್ನು ತರುತ್ತದೆ ಎಂದು ಭರವಸೆ ಇಡುವುದು ಕಷ್ಟಸಾಧ್ಯ.

**ಪರಾಮರ್ಶನ**

1. Aucoin, P. (1995). The New Public Management: Canada in comparative perspective. Montreal: Institute for Research and Public Policy.
2. Boston, J., Martin, J., Pallot, J., & Walsh, P. (1996). Public management: the New Zealand model. Auckland: Oxford University Press
3. Buschor, E. (1994). Introduction: from advanced public accounting via performance measurement to New Public Management. In: E. Buschor, & K. Schedler, Perspectives on performance measurement and public sector accounting (pp. vii–xviii). Bern: Haupt
4. Rowen (1990) Commitment and Control: Alternative Strategies for the Organizational Design of Schools, Review of Research in Education, Vol. 16 (1990), pp. 353-389.
4. Some inputs for Draft National Education Policy 2016, Ministry of Human Resource Development, Government of India.

5. Subramanian, T. R Committee (2016) Report of the Committee
for Evolution of the New Education Policy, Ministry of Human
Resource Development, National Policy of Education 2016, April.

**ಸುಜಾತಾ** ಅವರು ಶಾಲಾ ನಾಯಕತ್ವ, ಶಾಲಾಸುಧಾರಣೆ ಹಾಗು ಶೈಕ್ಷಣಿಕ ಪರಿವರ್ತನೆಯ ಕ್ಷೇತ್ರಗಳಲ್ಲಿ ಕಾರ್ಯನಿರತರಾಗಿದ್ದಾರೆ. ಈ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಸರ್ಕಾರೇತರ ಸಂಸ್ಥೆ ಹಾಗು ಶಾಲೆಗಳೊಂದಿಗೆ ಅವರು ಸಕ್ರಿಯರಾಗಿದ್ದಾರೆ. ಸುಜಾತಾ ಅವರು ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯ ಹಾಗು "ಭಾರತೀಯ ವಿಕಾಸ ನಿರ್ವಹಣಾ ಸಂಸ್ಥೆ"ಗಳಲ್ಲಿ ಬೋಧಕರಾಗಿದ್ದಾರೆ. ಅವರನ್ನು sujatha.rao@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ: ಕುಶಾಲ್ ಬಿ.ಎಸ್

ಪರಿಶೀಲನೆ : ಚಂದ್ರಶೇಖರ್ ಮಂಡೆಕೋಲು